

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 996 |
| ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 21.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯಲ್ಲಿ ಸದ್ಯ ಎಷ್ಟು ಮರಳು ನಿಕ್ಷೇಪಗಳನ್ನು ಗುರುತಿಸಲಾಗಿದೆ; ಇವುಗಳಲ್ಲಿ ಎಷ್ಟು ಮರಳು ನಿಕ್ಷೇಪಗಳನ್ನು ಹರಾಜು ಮುಖಾಂತರ ವಿಲೇವಾರಿ ಮಾಡಲಾಗಿದೆ; ಇವುಗಳನ್ನು ಹರಾಜು ಮುಖಾಂತರ ವಿಲೇವಾರಿ ಮಾಡಲಾಗಿದೆ; ಇವುಗಳನ್ನು ಹರಾಜಿನಲ್ಲಿ ಪಡೆದ ಗುತ್ತಿಗೆದಾರರು ಯಾರು; (ಕಳೆದ 2 ವರ್ಷಗಳ ನಿಕ್ಷೇಪವಾರು ಮಾಹಿತಿ ನೀಡುವುದು) | • ಉತ್ತರ ಕನ್ನಡ ಜಿಲ್ಲಾ ವ್ಯಾಪ್ತಿಯ ಬಹುತೇಕ ಪ್ರದೇಶಗಳು ಕರಾವಳಿ ನಿಯಂತ್ರಣ ವಲಯ (CRZ) ಪ್ರದೇಶದ ವ್ಯಾಪ್ತಿಯಲ್ಲಿ ಬರುವುದರಿಂದ, ಕೇಂದ್ರ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದ ಅಧಿಸೂಚನೆ ದಿನಾಂಕ 06.01.2011 ರಂತೆ ಕರಾವಳಿ ನಿಯಂತ್ರಣ ವಲಯದಲ್ಲಿ (CRZ) ಮರಳು ಗಣಿಗಾರಿಕೆಯನ್ನು ನಿಷೇಧಿಸಲಾಗಿರುತ್ತದೆ.<br>• ಉತ್ತರ ಕನ್ನಡ ಜಿಲ್ಲಾ ವ್ಯಾಪ್ತಿಯಲ್ಲಿ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ ಪ್ರದೇಶ (Non CRZ) ವು ಕಡಿಮೆ ಇದ್ದು, ಬಹುತೇಕ ಭಾಗವು ಅರಣ್ಯ ಪ್ರದೇಶದ ಪರಿಸರ ಸೂಕ್ಷ್ಮ ವಲಯ ಪ್ರದೇಶದಲ್ಲಿ ಬರುತ್ತಿದ್ದು, ಸದರಿ ಪ್ರದೇಶದಲ್ಲಿ ಮರಳು ಗಣಿಗಾರಿಕೆಗೆ ಅವಕಾಶವಿರುವುದಿಲ್ಲ.<br>• ಮುಂದುವರೆದು, ಕರಾವಳಿ ಜಿಲ್ಲೆಯ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ (Non CRZ) ಪ್ರದೇಶಗಳಿದ್ದರೂ ಸಹ ಗಣಿಗಾರಿಕೆ ಮಾಡಬಹುದಾದಷ್ಟು ಮರಳಿನ ನಿಕ್ಷೇಪವಿರುವುದಿಲ್ಲ.<br>• ಮೇಲ್ಕಂಡ ಕಾರಣಗಳಿಂದ, ಉತ್ತರ ಕನ್ನಡ ಜಿಲ್ಲೆಯ ಕರಾವಳಿ ನಿಯಂತ್ರಣ ವಲಯ ಹೊರತುಪಡಿಸಿದ ನದಿ ಪಾತ್ರಗಳ ವ್ಯಾಪ್ತಿಯಲ್ಲಿ ಯಾವುದೇ ಮರಳು ನಿಕ್ಷೇಪ ಪ್ರದೇಶಗಳನ್ನು ಗುರುತಿಸಿರುವುದಿಲ್ಲ ಹಾಗೂ ಹರಾಜು ಮೂಲಕ ಮರಳು ನಿಕ್ಷೇಪಗಳನ್ನು ವಿಲೇವಾರಿ ಮಾಡಿರುವುದಿಲ್ಲ. |

| | | |
|---|---|---|
| | | • ಕರಾವಳಿ ಜಿಲ್ಲೆಯ CRZ ನದಿ ಪಾತ್ರಗಳ ವ್ಯಾಪ್ತಿಯಲ್ಲಿ ಭಾರತ ಸರ್ಕಾರದ ಪರಿಸರ, ಅರಣ್ಯ ಮತ್ತು ಹವಾಮಾನ ಬದಲಾವಣೆ ಮಂತ್ರಾಲಯದ ಅಧಿಕೃತ ಜ್ಞಾಪನ ಪತ್ರ ದಿನಾಂಕ 24.02.2011, 09.06.2011 ಮತ್ತು 08.11.2011 ರನ್ವಯ ಕರಾವಳಿ ನಿಯಂತ್ರಣ ವಲಯದ ನದಿಪಾತ್ರಗಳಲ್ಲಿ ಮೀನುಗಾರಿಕಾ ದೋಣಿಗಳು ಸುಗಮ ಸಂಚಾರಕ್ಕೆ ಅಡ್ಡಿಪಡಿಸುವ ಮರಳು ದಿಬ್ಬಗಳನ್ನು ಸಾಂಪ್ರದಾಯಿಕ ರೀತಿಯಲ್ಲಿ ತೆರವುಗೊಳಿಸಲು 04 ಮರಳು ದಿಬ್ಬಗಳನ್ನು ಗುರುತಿಸಿ, 42 ತಾತ್ಕಾಲಿಕ ಪರವಾನಿಗೆದಾರರಿಗೆ ಸದರಿ ದಿಬ್ಬಗಳಲ್ಲಿ ಮರಳು ತೆಗೆಯಲು ಅನುಮತಿ ನೀಡಲಾಗಿದೆ. |
| ಆ) | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರ ಭಾಗದ ಜನರಿಗೆ ಉದ್ಯೋಗವಿಲ್ಲದೆ ಜೀವನ ನಿರ್ವಹಣೆಗೆ ಮಾಡುವುದು ಕಷ್ಟವಾಗಿದ್ದು ಪಕ್ಕದ ಬೆಳಗಾವಿ ಜಿಲ್ಲೆಯ ಲೊಂಡಾ ಭಾಗದಲ್ಲಿ ಮರಳು ಗಣಿಗಾರಿಕೆಗೆ ಅವಕಾಶ ನೀಡದೆ ಅದನ್ನೆ ನಂಬಿರುವ ಅಲ್ಲಿಯ ಜನರ ಜೀವನ ನಿರ್ವಹಣೆ ಕಷ್ಟವಾಗಿರುವುದರಿಂದ ಕೂಡಲೇ ಸರ್ಕಾರ ಗಮನಹರಿಸಿ ಅವರಿಗೆ ಪಾಂಡರಿ ನದಿಯಲ್ಲಿ ಮರಳು ತೆಗೆಯಲು ಅವಕಾಶ ನೀಡುವುದೆ; ಜೋಯಿಡಾ ತಾಲ್ಲೂಕಿನಲ್ಲಿ ಬಹಳಷ್ಟು ಸ್ಥಳಗಳಲ್ಲಿ ಸಣ್ಣ ಪ್ರಮಾಣದ ಮರಳುಗಾರಿಕೆಗೆ ಇಲ್ಲಿಯವರೆಗೆ ಅವಕಾಶ ನೀಡದೆ ಇರುವುದನ್ನು ಪರಿಶೀಲಿಸಿ ಕೂಡಲೇ ಮರಳು ತೆಗೆಯಲು ಅವಕಾಶ ಮಾಡಿಕೊಡಲಾಗುವುದೇ? (ವಿವರ ನೀಡುವುದು) | ಉತ್ತರ ಕನ್ನಡ ಜಿಲ್ಲೆ, ಜೋಯಿಡಾ ತಾಲ್ಲೂಕಿನ IV, V & VI ನೇ ಶ್ರೇಣಿಯ ಹಳ್ಳಗಳಲ್ಲಿ ಹಾಗೂ ಪಾಂಡರಿ ನದಿ ಪಾತ್ರದಲ್ಲಿ ಮರಳು ಗಣಿಗಾರಿಕೆ ಮಾಡುವಷ್ಟು ಮರಳಿನ ನಿಕ್ಷೇಪವಿರುವುದಿಲ್ಲ ಹಾಗೂ ನದಿ ಪಾತ್ರದ ಬಹುತೇಕ ಭಾಗವು ಅರಣ್ಯ ಪ್ರದೇಶದ ಸೂಕ್ಷ್ಮ ವಲಯದಲ್ಲಿ ಬರುತ್ತಿರುವ ಕಾರಣ ಮರಳು ಗಣಿಗಾರಿಕೆಗೆ ಅನುಮತಿ ನೀಡಲು ಅವಕಾಶವಿರುವುದಿಲ್ಲ. |

ಸಂಖ್ಯೆ ಸಿಐ 652 ಎಂಎಂಎನ್ 2021

Halappa B

**(ಆಚಾರ್ ಹಾಲಪ್ಪ ಬಸಪ್ಪ)**

ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.